# ಕರ್ನಾಟಕ ವಿಧಾನಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 138 |
| ಸದಸ್ಯರ ಹೆಸರು | ಶ್ರೀ ಕವಟಗಿಮಠ ಮಹಾಂತೇಶ ಮಲ್ಲಿಕಾರ್ಜುನ (ಸ್ಥಳೀಯ ಸಂಸ್ಥೆಗಳಿಂದ ಚುನಾಯಿತರಾದವರು) |
| ಉತ್ತರಿಸಬೇಕಾದ ದಿನಾಂಕ | 21-09-2020 |
| ಉತ್ತರಿಸಬೇಕಾದ ಸಚಿವರು | ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು |

| ಪ್ರಶ್ನೆ | ಉತ್ತರ |
|---|---|
| **ಅ)** ರಸ್ತೆ ಸುರಕ್ಷತೆ ವಿಷಯವನ್ನು ಶಾಲೆಯ ಪಠ್ಯದಲ್ಲಿ ಸೇರಿಸುವ ಯೋಜನೆ ಸರ್ಕಾರಕ್ಕಿದೆಯೇ; | ರಸ್ತೆ ಸುರಕ್ಷತೆ ವಿಷಯವನ್ನು ವಿವಿಧ ತರಗತಿಗಳ ಶಾಲೆಯ ಪಠ್ಯದಲ್ಲಿ ಸೇರಿಸಲಾಗಿದೆ. ಸಂಕ್ಷಿಪ್ತ ವಿವರ ಪಟ್ಟಿ ಲಗತ್ತಿಸಿದೆ. |
| **ಆ)** ಈ ವಿಷಯಕ್ಕೆ ಸಂಬಂಧಿಸಿದಂತೆ ಸರ್ಕಾರದಿಂದ ಆದೇಶ ಹೊರಡಿಸಲಾಗಿದೆಯೇ; | ಈಗಾಗಲೇ ಪಠ್ಯಕ್ರಮದಲ್ಲಿ ಈ ವಿಷಯವನ್ನು ಅಳವಡಿಸಲಾಗಿದೆ. |
| **ಇ)** ರಸ್ತೆ ಸುರಕ್ಷತೆ ಕುರಿತು ಮಕ್ಕಳಿಗೆ ಮನದಟ್ಟಾಗುವಂತೆ ತಿಳಿಸುವ ಪಠ್ಯಕ್ರಮವನ್ನು ರೂಪಿಸಲಾಗಿದೆಯೇ; (ಮಾಹಿತಿ ಒದಗಿಸುವುದು) | ಎನ್.ಸಿ.ಎಫ್–2005ನ್ನು ಆಧರಿಸಿ ಪಠ್ಯಕ್ರಮ/ಪಠ್ಯವಸ್ತುವನ್ನು ಡಿ.ಎಸ್.ಇ.ಆರ್.ಟಿ ಸಂಸ್ಥೆಯು ರೂಪಿಸಿದ ಈ ಪಠ್ಯಕ್ರಮ/ಪಠ್ಯವಸ್ತುವನ್ನು ಆಧರಿಸಿ ಕರ್ನಾಟಕ ಪಠ್ಯಪುಸ್ತಕ ಸಂಘವು ಪಠ್ಯಪುಸ್ತಕಗಳನ್ನು ರಚಿಸಿದೆ. ಈ ಕೆಳಕಂಡ ಪಠ್ಯಪುಸ್ತಕಗಳಲ್ಲಿ ರಸ್ತೆ ಸುರಕ್ಷತೆ ಕ್ರಮಗಳನ್ನು ಅಳವಡಿಸಲಾಗಿದೆ.<br>2ನೇ ತರಗತಿ ಹಿಂದಿ ಪ್ರಥಮ ಭಾಷೆ<br>4ನೇ ತರಗತಿ ಆಂಗ್ಲ ದ್ವಿತೀಯ ಭಾಷೆ<br>4ನೇ ತರಗತಿ ಪರಿಸರ ಅಧ್ಯಾಯನ<br>6ನೇ ತರಗತಿ ದೈಹಿಕ ಶಿಕ್ಷಣ<br>7ನೇ ತರಗತಿ ಕನ್ನಡ ದ್ವಿತೀಯ ಭಾಷೆ<br>7ನೇ ತರಗತಿ ಆಂಗ್ಲ ತೃತೀಯ ಭಾಷೆ<br>7ನೇ ತರಗತಿ ದೈಹಿಕ ಶಿಕ್ಷಣ [ಒಳ ರಕ್ಷಾ ಪುಟಗಳಲ್ಲಿ]<br>9ನೇ ತರಗತಿ ಹಿಂದಿ ಪ್ರಥಮ ಭಾಷೆ<br>9ನೇ ತರಗತಿ ವಿಜ್ಞಾನ [ಒಳ ರಕ್ಷಾ ಪುಟಗಳಲ್ಲಿ]<br>ಈ ಸಂಬಂಧ ಪೂರಕ ಮಾಹಿತಿಯನ್ನು ಅನುಬಂಧದಲ್ಲಿ ಒದಗಿಸಲಾಗಿದೆ. |
| **ಈ)** ಯಾವ ಮಾದರಿಯ ಮುಖಾಂತರ ರಸ್ತೆ ಸುರಕ್ಷತೆ ಕುರಿತು ಶಿಕ್ಷಣ ಒದಗಿಸಲು ಪಠ್ಯಕ್ರಮವನ್ನು ಮಾಡಲಾಗಿದೆ? | ಗದ್ಯಗಳು, ಪದ್ಯಗಳು, ಚಟುವಟಿಕೆ, ಯೋಜನಾ ಕಾರ್ಯ ಇತ್ಯಾದಿಗಳ ಮೂಲಕ ರಸ್ತೆ ಸುರಕ್ಷತಾ ಪಠ್ಯವನ್ನು ಮಕ್ಕಳಿಗೆ ಸುಲಭವಾಗಿ ತಲುಪಿಸಲು ಕ್ರಮಕೈಗೊಳ್ಳಲಾಗಿದೆ. |

ಇಡಿ 115 ಪಿಎಂಸಿ 2020

[ ಎಸ್.ಸುರೇಶ್ ಕುಮಾರ್]
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ
ಸಕಾಲ ಸಚಿವರು.

# ರಸ್ತೆ ಸುರಕ್ಷತೆಯ ಬಗ್ಗೆ ಪಠ್ಯಪುಸ್ತಕದಲ್ಲಿರುವ ಸಂಕ್ಷಿಪ್ತ ವರದಿ

**2ನೇ ತರಗತಿ ಹಿಂದಿ ಪ್ರಥಮ ಭಾಷೆ**

**ಪದ್ಯ- ಟ್ರಾಫಿಕ್ ಲೈಟ್**

ಟ್ರಾಫಿಕ್ ಲೈಟ್ ಪದ್ಯದಲ್ಲಿ ರಸ್ತೆಯಲ್ಲಿ ಸಂಚರಿಸುವ ಸಂದರ್ಭದಲ್ಲಿ ಕೆಂಪು ಬಣ್ಣದ ದೀಪ ಬಂದಾಗ, ವಾಹನಗಳನ್ನು ನಿಲ್ಲಬೇಕೆಂಬ ಸಂಕೇತವನ್ನು ಸೂಚಿಸುತ್ತದೆ. ಹಳದಿ ಬಣ್ಣದ ದೀಪ ಬಂದಾಗ, ಹೊರಡಲು ಸಿದ್ಧರಾಗಿ ಎಂಬ ಸಂಕೇತವನ್ನು ಸೂಚಿಸುತ್ತದೆ. ಹಸಿರು ಬಣ್ಣದ ದೀಪ ಬಂದಾಗ, ವಾಹನಗಳು ಸಂಚರಿಸಬೇಕು ಎಂಬ ಆಶಯವನ್ನು ಸೂಚಿಸುತ್ತದೆ. ಈ ಸಂಚಾರಿ ಟ್ರಾಫಿಕ್ ಲೈಟ್ ಸೂಚಿಸುವ ನಿಯಮವನ್ನು ಪಾಲಿಸಬೇಕು ಇಲ್ಲದಿದ್ದರೆ ಅಪಘಾತವಾಗುವ ಸಾಧ್ಯತೆಯಿರುತ್ತದೆ ಎಂದು ಮಕ್ಕಳಿಗೆ ತಿಳಿಸಲಾಗಿದೆ.

**4 ನೇ ತರಗತಿ ಆಂಗ್ಲ ದ್ವಿತೀಯ ಭಾಷೆ**

**ಪದ್ಯ-ಟ್ರಾವೆಲ್**

ಟ್ರಾವೆಲ್ ಪದ್ಯದಲ್ಲಿ ಸಿಗ್ನಲ್ ದೀಪದಲ್ಲಿ ಕೆಂಪು ಬಣ್ಣದ ದೀಪ ಬಂದಾಗ, ಝೀಬ್ರಾ ಕ್ರಾಸಿಂಗ್‌ನಲ್ಲಿಯೇ ರಸ್ತೆಯನ್ನು ಜಾಗ್ರತೆಯಿಂದ ದಾಟಬೇಕೆಂದು ಎಂದು ತಿಳಿಸಿದ್ದಾರೆ.

**4 ನೇ ತರಗತಿ ಪರಿಸರ ಅಧ್ಯಯನ**

**ಪಾಠ-ಟ್ರಾಫಿಕ್ ನಿಯಮಗಳು**

ಟ್ರಾಫಿಕ್ ನಿಯಮಗಳು ಪಾಠದಲ್ಲಿ ಟ್ರಾಫಿಕ್ ನಿಯಮಗಳನ್ನು ಅಧ್ಯಾಪಕರು ಶಾಲಾ ಮಕ್ಕಳಿಗೆ ಪ್ರಮುಖವಾಗಿ ಈ ಅಂಶಗಳನ್ನು ತಿಳಿಸಲಾಗಿದೆ.

1. ಜೀಬ್ರಾ ಕ್ರಾಸಿಂಗ್ ನಲ್ಲೇ ರಸ್ತೆಯನ್ನು ದಾಟಬೇಕು.
2. ಕೆಂಪು, ಹಳದಿ ಮತ್ತು ಹಸಿರು ಸಿಗ್ನಲ್ ದೀಪಗಳು ನಿಲ್ಲು, ಸಿದ್ಧವಾಗು ಹಾಗೂ ಹೊರಡು ಎಂಬುದನ್ನು ಸೂಚಿಸುತ್ತವೆ. ಟ್ರಾಫಿಕ್ ಸಿಗ್ನಲ್ ದೀಪಗಳು ಸೂಚಿಸಿದಂತೆ ವಾಹನಗಳು ಚಲಿಸಬೇಕು ಎಂದು ಮಕ್ಕಳಿಗೆ ತಿಳಿಸಲಾಗಿದೆ.
3. ಸೈನ್‌ಬೋರ್ಡ್‌ಗಳನ್ನು ಬಳಸಿ ಮಕ್ಕಳಿಗೆ ವಿವಿಧ ಚಿಹ್ನೆಗಳ ಮಹತ್ವವನ್ನು ತಿಳಿಸಲಾಗಿದೆ ಹಾಗೂ ಜಾಗೃತ ಕ್ರಮಗಳನ್ನು ರಸ್ತೆ ದಾಟುವಾಗ ಅನುಸರಿಸಬೇಕೆಂದು ತಿಳಿಸಲಾಗಿದೆ.

**6ನೇ ತರಗತಿ ದೈಹಿಕ ಶಿಕ್ಷಣ**

**ಪಾಠ- ವೈಯಕ್ತಿಕ ಸುರಕ್ಷತೆ**

ವೈಯಕ್ತಿಕ ಸುರಕ್ಷತೆ ಪಾಠದಲ್ಲಿ ರಸ್ತೆಯಲ್ಲಿ ಚಲಿಸುವಾಗ ಪಾಲಿಸಬೇಕಾದ ಕೆಲವು ಮುಖ್ಯ ಸುರಕ್ಷತಾ ಕ್ರಮಗಳ ಬಗ್ಗೆ ಈ ಕೆಳಕಂಡಂತೆ ಮಕ್ಕಳಿಗೆ ತಿಳಿಸಲಾಗಿದೆ.

1. ರಸ್ತೆಯಲ್ಲಿ ನಡೆಯುವಾಗ ಪಾದಚಾರಿಗಳಿಗೆ ಮೀಸಲಾಗಿರುವ ರಸ್ತೆಯಲ್ಲಿಯೇ ನಡೆಯಬೇಕು.
2. ರಸ್ತೆಗಳನ್ನು ದಾಟುವಾಗ ಝೀಬ್ರಾ ಪಟ್ಟಿಯಲ್ಲಿಯೇ ದಾಟಬೇಕು.
3. ವಾಹನಗಳಲ್ಲಿ ಸಂಚರಿಸುವವರು 'ಸಿಗ್ನಲ್ ದೀಪ' ಗಳನ್ನು ಗಮನಿಸಿಯೇ ಮುಂದೆ ಸಾಗಬೇಕು.
4. ವಾಹನ ಸವಾರರು ಮುಂದಿನ ವಾಹನವನ್ನು ಹಿಂದೆ ಹಾಕುವಾಗ ಬಲಬದಿಯಿಂದಲೇ ಹಿಂದೆ ಹಾಕಬೇಕು.
5. ರಸ್ತೆಯಲ್ಲಿ ಹಾಕಿರುವ ಸೂಚನಾ ಫಲಕಗಳನ್ನು ಗಮನಿಸಬೇಕು.

7ನೇ ತರಗತಿ ದೈಹಿಕ ಶಿಕ್ಷಣ - ಒಳಪುಟಗಳು

ವಾಹನ ಚಾಲಕರು ಹಾಗೂ ದಾರಿಹೋಕರು ಮಾನವ ರಹಿತ ಲೆವೆಲ್ ಕ್ರಾಸಿಂಗ್ ಬಳಸುವಾಗ ತೆಗೆದುಕೊಳ್ಳಬೇಕಾದ ಮುನ್ನೆಚ್ಚರಿಕೆ ಕ್ರಮಗಳನ್ನು ಮುಖ್ಯ ರಕ್ಷಣಾ ಅಧಿಕಾರಿಗಳು ದಕ್ಷಿಣ ಪಶ್ಚಿಮ ರೈಲ್ವೆ ವಿಭಾಗದಿಂದ ಲೆವೆಲ್ ಕ್ರಾಸಿಂಗ್‌ಗಳಲ್ಲಿ ರಕ್ಷಣಾ ಸೂಚಿಗಳನ್ನು,ಪಠ್ಯಪುಸ್ತಕಗಳ ಒಳಪುಟಗಳಲ್ಲಿ ಅಳವಡಿಸಿ ಮಕ್ಕಳಿಗೆ ಲೆವೆಲ್ ಕ್ರಾಸಿಂಗ್ ಬಗ್ಗೆ ಮಾಹಿತಿಯನ್ನು ನೀಡಲಾಗಿದೆ.

1. ಮಾನವ ರಹಿತ ಲೆವೆಲ್ ಕ್ರಾಸಿಂಗ್ ಸಮೀಪಿಸುತ್ತಿದ್ದಂತೆ ವಾಹನಗಳ ವೇಗವನ್ನು ಕಡಿಮೆ ಮಾಡಬೇಕು.
2. ಮಾನವ ರಹಿತ ಲೆವೆಲ್ ಕ್ರಾಸಿಂಗ್ ದಾಟುವ ಮೊದಲು STOP ಫಲಕದ ಎದುರು ವಾಹನವನ್ನು ನಿಲ್ಲಿಸಬೇಕು.
3. ವಾಹನವನ್ನು ನಿಲ್ಲಿಸಿ ಬಲಗಡೆ ಹಾಗೂ ಎಡಗಡೆಯಿಂದ ಟ್ರೈನುಗಳಾವುವೂ ಬರುವ ಸೂಚನೆಗಳಿಲ್ಲ ಎಂಬುದನ್ನು ಖಾತ್ರಿ ಪಡಿಸಿಕೊಂಡು ಆಗ ಮಾತ್ರ ರೈಲ್ವೆ ಹಳಿಗಳನ್ನು ದಾಟಬೇಕು. ಚಾಲಕನಿಗೆ ದೃಷ್ಟಿದೋಷವಿದ್ದಲ್ಲಿ ಇತರರಿಂದ ಈ ವಿಚಾರವನ್ನು ಖಾತ್ರಿಪಡಿಸಿಕೊಂಡ ಮೇಲೆ ಹಳಿ ದಾಟುವ ಪ್ರಯತ್ನ ಮಾಡಬೇಕು.

7ನೇ ತರಗತಿ ಕನ್ನಡ ತೃತೀಯ ಭಾಷೆ

ಪಾಠ-ರಸ್ತೆ ನಿಯಮಗಳು

ರಸ್ತೆ ನಿಯಮಗಳು ಪಾಠದಲ್ಲಿ ರಸ್ತೆಗಳು ದೇಶದ ನರನಾಡಿಗಳಿದ್ದಂತೆ. ರಸ್ತೆಯ ಅಪಘಾತಗಳು ಬಹಳ ಆತಂಕಕಾರಿ. ರಸ್ತೆಯ ನಿಯಮಗಳ ಪಾಲನೆಯಿಂದ ನಾವೂ ಸುರಕ್ಷಿತರಾಗಿರುತ್ತೇವೆ, ಇತರರೂ ಸುರಕ್ಷಿತವಾಗಿರುತ್ತಾರೆ. ಅಪಘಾತಗಳನ್ನು ತಪ್ಪಿಸುವಲ್ಲಿ ನಮ್ಮ ಪಾಲೂ ಇರಲಿ ಅದಕ್ಕಾಗಿ ರಸ್ತೆ ನಿಯಮವನ್ನು ತಿಳಿಸಿದ್ದಾರೆ.

1. ನಾವು ಯಾವಾಗಲೂ ಪಾದಚಾರಿಗಳ ಜಾಗದ ರಸ್ತೆಯ ಮೇಲೆ ಎಡಭಾಗದಲ್ಲೆ ಚಲಿಸಬೇಕು.
2. ವಾಹನಗಳು ನಿಲ್ಲಲು ಚಲಿಸಲು ಹಾಗೂ ಚಲಿಸುವುದಕ್ಕೋಸ್ಕರ ಸಿದ್ಧರಾಗಲೂ ಟ್ರಾಫಿಕ್ ಸಿಗ್ನಲ್ ಲೈಟ್‌ಗಳಿವೆ.
3. ಕೆಂಪು ದೀಪ ಹತ್ತಿದರೆ ಎದುರು ರಸ್ತೆಯ ವಾಹನ ಚಾಲಕರು ತಮ್ಮ ವಾಹನವನ್ನು ನಿಲ್ಲಿಸಿಕೊಳ್ಳಬೇಕು.
4. ಹಳದಿ ದೀಪ ಹತ್ತಿದಾಕ್ಷಣ ವಾಹನವನ್ನು ಚಾಲನೆಯಲ್ಲಿಟ್ಟು ಹೊರಡಲು ಸಿದ್ಧರಾಗಬೇಕು.
5. ಹಸಿರು ದೀಪ ಹತ್ತಿದಾಕ್ಷಣ ವಾಹನ ಚಲಿಸಬೇಕು.
6. ಝೀಬ್ರಾ ಕ್ರಾಸಿಂಗ್ ನಲ್ಲಿ ರಸ್ತೆ ದಾಟಬೇಕು. ರಸ್ತೆ ದಾಟುವಾಗ ಎಡ ಬಲ ನೋಡಿ ದಾಟಬೇಕು. ದಾಟುವಾಗ ಅವಸರ ಮಾಡಬಾರದು.
7. ಚಿಹ್ನಾ ಫಲಕ (ಸೈನ್ ಬೋರ್ಡ್ ನ್ನು ನೋಡಿ ಮಾಹಿತಿಯನ್ನು ಮಗು ಮತ್ತು ಮಾಮನ ನಡುವಿನ ಸಂಭಾಷಣೆಯ ಮೂಲಕ ತಿಳಿಸಿಕೊಡಲಾಗಿದೆ.

**7 ನೇ ತರಗತಿ ಆಂಗ್ಲ ತೃತೀಯ ಭಾಷೆ**

**ಪಾಠ– ರೋಡ್ ಸೇಫ್ಟಿ (Road Safety)**

ರೋಡ್ ಸೇಫ್ಟಿ ಪಾಠದಲ್ಲಿ ಈ ಕೆಳಕಂಡ ಅಂಶಗಳು ತಾತ ಮತ್ತು ಮೊಮ್ಮಕ್ಕಳೊಂದಿಗೆ ಸಂಭಾಷಣೆಯ ಮೂಲಕ ತಿಳಿಸಲಾಗಿದೆ.

1. ಝೀಬ್ರಾ ಕ್ರಾಸಿಂಗ್ ನಲ್ಲಿ ರಸ್ತೆ ದಾಟಬೇಕು. ರಸ್ತೆ ದಾಟುವಾಗ ಎಡ ಬಲ ನೋಡಿ ದಾಟಬೇಕು.
2. ಕೆಂಪು ದೀಪ ಹತ್ತಿದರೆ ಎದುರು ರಸ್ತೆಯ ವಾಹನ ಚಾಲಕರು ತಮ್ಮ ವಾಹನವನ್ನು ನಿಲ್ಲಿಸಿಕೊಳ್ಳಬೇಕು.
3. ಹಳದಿ ದೀಪ ಹತ್ತಿದಾಕ್ಷಣ ವಾಹನವನ್ನು ಚಾಲನೆಯಲ್ಲಿಟ್ಟು ಹೊರಡಲು ಸಿದ್ಧರಾಗಬೇಕು.
4. ಹಸಿರು ದೀಪ ಹತ್ತಿದಾಕ್ಷಣ ವಾಹನ ಚಲಿಸಬೇಕು.
5. ರಸ್ತೆ ದಾಟುವಾಗ ಅವಸರ ಮಾಡಬಾರದು.

**9 ನೇ ತರಗತಿ ಹಿಂದಿ ಪ್ರಥಮ ಭಾಷೆ**

**ಪಠ್ಯ– ಸಡಕ್ ಕೀ ರಕ್ಷಾ ಸಬಕೀ ಸುರಕ್ಷಾ**

ಸಡಕ್ ಕೀ ರಕ್ಷಾ – ಸಬಕೀ ಸುರಕ್ಷಾ ಪಾಠದಲ್ಲಿ ರಸ್ತೆ ಸುರಕ್ಷತೆಯ ಬಗ್ಗೆ ನಾಗರೀಕರಿಗೆ ಇರಬೇಕಾದ ತಿಳುವಳಿಕೆ ಹಾಗು ರಸ್ತೆಯನ್ನು ಸ್ವಚ್ಛವಾಗಿಡಬೇಕೆಂದು ಕಥೆಯ ಮೂಲಕ ತಿಳಿಸಿದ್ದಾರೆ. ರಸ್ತೆಯನ್ನು ಸ್ವಚ್ಛವಾಗಿ ಇಡದಿದ್ದರೆ ಆಗು ಅನಾಹುತಕ್ಕೆ ನಾವೇ ಕಾರಣ ಎಂದು ತಿಳಿಸಿದ್ದಾರೆ. ಪ್ರತಿ ನಾಗರೀಕನಿಗೆ ರಸ್ತೆಯ ನಿಯಮಗಳ ಬಗ್ಗೆ ಇರಬೇಕಾದ ಪ್ರಜ್ಞೆ ಹಾಗೂ ಕರ್ತವ್ಯಗಳ ಬಗ್ಗೆ ತಿಳಿಸಲಾಗಿದೆ.

**9ನೇ ತರಗತಿ ವಿಜ್ಞಾನ – ಒಳಪುಟಗಳು**

ಬೆಂಗಳೂರು ನಗರ ಸಂಚಾರಿ ಪೋಲಿಸ್ ಮತ್ತು ಟ್ರಾಫಿಕ್ ವಾರ್ಡನ್ ಸಂಸ್ಥೆಯವರು ನೀಡಿರುವ ಒಳಪುಟದಲ್ಲಿ ರಸ್ತೆ ದಾಟಲು ಜೀಬ್ರಾ ಪಟ್ಟಿಯನ್ನು ಉಪಯೋಗಿಸಿ, ಜೀಬ್ರಾ ಪಟ್ಟಿ ಇಲ್ಲದಿದ್ದಲ್ಲಿ, ರಸ್ತೆಯನ್ನು ದಾಟಲು ಎಡ ಮತ್ತು ಬಲಕ್ಕೆ ನೋಡಿ ವಾಹನಗಳ ಓಡಾಟ ಕಡಿಮೆಯಾದ ಮೇಲೆ ಜಾಗ್ರತೆಯಿಂದ ದಾಟಬೇಕು ಎಂಬ ಅಂಶವನ್ನು ತಿಳಿಸಿದ್ದಾರೆ. ಸಂಚಾರ ನಿಯಮಗಳ ಬಗ್ಗೆ ಶಾಲಾ ಮಕ್ಕಳಲ್ಲಿ ಅರಿವು ಮೂಡಿಸಲು ಹಾಗೂ ಇದರ ಬಗ್ಗೆ ಮಾಹಿತಿಯನ್ನು ಈ ಕೆಳಕಂಡಂತೆ ನೀಡಲಾಗಿದೆ.

1. ಮಕ್ಕಳು ಬಸ್ ಹತ್ತುವಾಗ, ಇಳಿಯುವಾಗ ಸರದಿ ಸಾಲನ್ನು ಪಾಲಿಸಬೇಕು.
2. ಬಸ್ಸಿನಲ್ಲಿ ಡ್ರೈವರೊಡನೆ ಮಾತನಾಡಬಾರದು.
3. ಚಲಿಸುವ ಬಸ್ಸನ್ನು ಏರುವುದು ಮತ್ತು ಇಳಿಯುವುದು ಮಾಡಬಾರದು.
4. ಯಾವಾಗಲೂ ಫುಟ್‌ಫಾತ್ ಮೇಲೆ ನಡೆಯಬೇಕು.

ವ್ಯವಸ್ಥಾಪಕ ನಿರ್ದೇಶಕರು
ಕರ್ನಾಟಕ ಪಠ್ಯಪುಸ್ತಕ ಸಂಘ
ಬೆಂಗಳೂರು.